# ಕರ್ನಾಟಕ ವಿಧಾನಸಭೆ

(15ನೇ ವಿಧಾನಸಭೆ)

ಹದಿನೈದನೇ ಅಧಿವೇಶನ

# ಕಾರ್ಯಕಲಾಪಗಳ ಪಟ್ಟಿ

ಬುಧವಾರ, ದಿನಾಂಕ 22ನೇ ಫೆಬ್ರವರಿ, 2023
(ಸಮಯ: ಬೆಳಿಗ್ಗೆ 11.00 ಗಂಟೆಗೆ)

----

## 1. ಪ್ರಶ್ನೋತ್ತರ

ಅ) ಸದನದಲ್ಲಿ ಉತ್ತರಿಸುವ ಪ್ರಶ್ನೆಗಳು : ಏಳನೇ ಪಟ್ಟಿ

ಆ) ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆಗಳು : ಏಳನೇ ಪಟ್ಟಿ

## 2. ಸಭೆಯ ಮುಂದಿಡಲಾಗುವ ಕಾಗದ ಪತ್ರಗಳು

1) **ಶ್ರೀ ಬಸವರಾಜ ಬೊಮ್ಮಾಯಿ (ಮಾನ್ಯ ಮುಖ್ಯಮಂತ್ರಿಗಳು) ಅವರು:–**

ಭಾರತ ಸಂವಿಧಾನದ 151(2)ನೇ ಅನುಚ್ಛೇದದ ಮೇರೆಗೆ, ಮಾರ್ಚ್ 2021ಕ್ಕೆ ಕೊನೆಗೊಂಡ ವರ್ಷಕ್ಕೆ ಇಲಾಖೆಗಳು ಮತ್ತು ಸಾರ್ವಜನಿಕ ವಲಯ ಉದ್ಯಮಗಳ ಮೇಲಿನ ಅನುಪಾಲನಾ ಲೆಕ್ಕಪರಿಶೋಧನೆ ವರದಿಯನ್ನು (2022ನೇ ವರ್ಷದ ವರದಿ ಸಂಖ್ಯೆ:7)

ಹಾಗೂ

ಲೋಕೋಪಯೋಗಿ ಇಲಾಖೆಯಲ್ಲಿ ರಸ್ತೆ ಕಾಮಗಾರಿಗಳ ಯೋಜನೆ ಮತ್ತು ಗುತ್ತಿಗೆ ನಿರ್ವಹಣೆ ಮೇಲಿನ ಕಾರ್ಯನಿರ್ವಹಣಾ ಸಮೀಕ್ಷೆ ವರದಿಯನ್ನು (2022ನೇ ವರ್ಷದ ವರದಿ ಸಂಖ್ಯೆ:8) ಸಭೆಯ ಮುಂದಿಡುವುದು.

2) ಮಾನ್ಯ ಸದಸ್ಯರುಗಳಿಗೆ ಪ್ರತ್ಯೇಕವಾಗಿ ಕಳುಹಿಸಲಾಗಿರುವ ಮೂರನೇ ಮತ್ತು ನಾಲ್ಕನೇ ಪಟ್ಟಿ ರೀತ್ಯಾ

..2/

## 3. ವರದಿಗಳನ್ನೊಪ್ಪಿಸುವುದು

1) **ಶ್ರೀ ಜಿ.ಹೆಚ್. ತಿಪ್ಪಾರೆಡ್ಡಿ** (ಅಧ್ಯಕ್ಷರು, ಸಾರ್ವಜನಿಕ ಉದ್ಯಮಗಳ ಸಮಿತಿ) ಅವರು ಕರ್ನಾಟಕ ವಿಧಾನಮಂಡಲದ ಸಾರ್ವಜನಿಕ ಉದ್ಯಮಗಳ ಸಮಿತಿಯ ನೂರ ಮೂವತ್ತನಾಲ್ಕನೇ ಮತ್ತು ನೂರ ಮೂವತ್ತೈದನೇ ವರದಿಗಳನ್ನೊಪ್ಪಿಸುವುದು.

2) **ಶ್ರೀ ಸಾ.ರಾ. ಮಹೇಶ್** (ಅಧ್ಯಕ್ಷರು, ಸಭೆಯ ಮುಂದಿಡಲಾದ ಕಾಗದ ಪತ್ರಗಳ ಸಮಿತಿ) ಅವರು ಕರ್ನಾಟಕ ವಿಧಾನಮಂಡಲದ ಸಭೆಯ ಮುಂದಿಡಲಾದ ಕಾಗದ ಪತ್ರಗಳ ಸಮಿತಿಯ ಮೂವತ್ತೆಂಟನೇ ವರದಿಯನ್ನೊಪ್ಪಿಸುವುದು.

3) **ಶ್ರೀ ಎಸ್. ಸುರೇಶ್ ಕುಮಾರ್** (ಅಧ್ಯಕ್ಷರು, ಅರ್ಜಿಗಳ ಸಮಿತಿ) ಅವರು ಕರ್ನಾಟಕ ವಿಧಾನಸಭೆಯ ಅರ್ಜಿಗಳ ಸಮಿತಿಯ 2022–23ನೇ ಸಾಲಿನ ನಾಲ್ಕನೇ ವರದಿಯನ್ನೊಪ್ಪಿಸುವುದು.

4) **ಶ್ರೀ ಜಿ. ಸೋಮಶೇಖರ ರೆಡ್ಡಿ** (ಅಧ್ಯಕ್ಷರು, ಸ್ಥಳೀಯ ಸಂಸ್ಥೆಗಳ ಮತ್ತು ಪಂಚಾಯತ್ ರಾಜ್ ಸಂಸ್ಥೆಗಳ ಸಮಿತಿ) ಅವರು ಕರ್ನಾಟಕ ವಿಧಾನಮಂಡಲದ ಸ್ಥಳೀಯ ಸಂಸ್ಥೆಗಳ ಮತ್ತು ಪಂಚಾಯತ್ ರಾಜ್ ಸಂಸ್ಥೆಗಳ ಸಮಿತಿಯ ಮೂವತ್ತೆಂಟನೇ ವರದಿಯನ್ನೊಪ್ಪಿಸುವುದು.

## 4. ವಿತ್ತೀಯ ಕಾರ್ಯಕಲಾಪಗಳು

ಅ) 2023–24ನೇ ಸಾಲಿನ ಆಯವ್ಯಯ ಅಂದಾಜುಗಳ ಮೇಲೆ ಮುಂದುವರೆದ ಸಾಮಾನ್ಯ ಚರ್ಚೆ (ಮೂರನೇ ದಿನ)

ಆ) 2022–23ನೇ ಸಾಲಿನ ಪೂರಕ ಅಂದಾಜುಗಳ (ಮೂರನೇ ಹಾಗೂ ಅಂತಿಮ ಕಂತು) ಮೇಲೆ ಚರ್ಚೆ (ಎರಡನೇ ದಿನ)

## 5. ಶಾಸನ ರಚನೆ

### I. ವಿಧೇಯಕಗಳನ್ನು ಮಂಡಿಸುವುದು

**1. ಶ್ರೀ ಬಸವರಾಜ ಬೊಮ್ಮಾಯಿ (ಮಾನ್ಯ ಮುಖ್ಯಮಂತ್ರಿಗಳು) ಅವರು:–**

ಅ) 2023ನೇ ಸಾಲಿನ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ (ತಿದ್ದುಪಡಿ) ವಿಧೇಯಕವನ್ನು ಮಂಡಿಸಲು ಅನುಮತಿ ಕೋರುವುದು;

ಆ) ಹಾಗೂ ವಿಧೇಯಕವನ್ನು ಮಂಡಿಸುವುದು.

**2. ಶ್ರೀ ಅರಬೈಲ್ ಶಿವರಾಂ ಹೆಬ್ಬಾರ (ಮಾನ್ಯ ಕಾರ್ಮಿಕ ಸಚಿವರು) ಅವರು:–**

ಅ) 2023ನೇ ಸಾಲಿನ ಕಾರ್ಖಾನೆಗಳ (ಕರ್ನಾಟಕ ತಿದ್ದುಪಡಿ) ವಿಧೇಯಕವನ್ನು ಮಂಡಿಸಲು ಅನುಮತಿ ಕೋರುವುದು;

ಆ) ಹಾಗೂ ವಿಧೇಯಕವನ್ನು ಮಂಡಿಸುವುದು.

..3/

## II. ವಿಧೇಯಕಗಳನ್ನು ಪರ್ಯಾಲೋಚಿಸುವುದು ಮತ್ತು ಅಂಗೀಕರಿಸುವುದು

**ಶ್ರೀ ವಿ. ಸುನಿಲ್ ಕುಮಾರ್ (ಮಾನ್ಯ ಇಂಧನ ಹಾಗೂ ಕನ್ನಡ ಮತ್ತು ಸಂಸ್ಕೃತಿ ಸಚಿವರು) ಅವರು:-**

ಅ) 2022ನೇ ಸಾಲಿನ ಕನ್ನಡ ಭಾಷಾ ಸಮಗ್ರ ಅಭಿವೃದ್ಧಿ ವಿಧೇಯಕವನ್ನು ಪರ್ಯಾಲೋಚಿಸಬೇಕೆಂದು ಸೂಚಿಸುವುದು;

ಆ) ಹಾಗೂ ವಿಧೇಯಕವನ್ನು ಅಂಗೀಕರಿಸಬೇಕೆಂದು ಸೂಚಿಸುವುದು.

## 6. ಗಮನ ಸೆಳೆಯುವ ಸೂಚನೆಗಳು

1) **ಶ್ರೀ ಡಿ.ಕೆ. ಶಿವಕುಮಾರ್ ಅವರು** – ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರವು ಶಿವರಾಮ ಕಾರಂತ ಬಡಾವಣೆಯನ್ನು ನಿರ್ಮಿಸಲು ಸ್ವಾಧೀನಪಡಿಸಿಕೊಂಡ ಭೂಮಿ, ಬಡಾವಣೆ ನಿರ್ಮಿಸಿರುವ ವಿಸ್ತೀರ್ಣ, ಬಾಕಿ ಉಳಿದಿರುವ ವಿಸ್ತೀರ್ಣ, ಭೂ ಸ್ವಾಧೀನಪಡಿಸಿಕೊಂಡ ರೈತರಿಗೆ ಪ್ರತಿ ಎಕರೆಗೆ ನೀಡಿರುವ ಪರಿಹಾರ ಮೊತ್ತ, ಕಾಮಗಾರಿಯನ್ನು ನಿರ್ವಹಿಸಲು ಗುತ್ತಿಗೆಯನ್ನು ನೀಡಿರುವ ಕಂಪನಿ/ಏಜೆನ್ಸಿ, ಗುತ್ತಿಗೆಯನ್ನು ನೀಡುವಾಗ ಅನುಸರಿಸಿರುವ ಮಾನದಂಡ, ಬಡಾವಣೆಯ ನಿರ್ಮಾಣದ ಹಂತ ಇವುಗಳ ವಿವರ ಹಾಗೂ ಟೆಂಡರ್ ಪ್ರಕ್ರಿಯೆಯಲ್ಲಿ ನಡೆದಿರುವ ಅವ್ಯವಹಾರ ಕುರಿತು ಕ್ರಮ ಕೈಗೊಳ್ಳದಿರುವ ಬಗ್ಗೆ ಮಾನ್ಯ ಮುಖ್ಯಮಂತ್ರಿಯವರ ಗಮನ ಸೆಳೆಯುವುದು.

2) **ಶ್ರೀಯುತರುಗಳಾದ ಹೆಚ್.ಕೆ. ಕುಮಾರಸ್ವಾಮಿ, ಕೆ.ಎಸ್. ಲಿಂಗೇಶ್, ಸುರೇಶ್ ಗೌಡ ಹಾಗೂ ಇತರರು** – ಹಾಸನ ನಗರ ಸಭೆಗೆ ವಿವಿಧ ಗ್ರಾಮಗಳನ್ನು ಸೇರ್ಪಡೆ ಮಾಡಿ ಆದೇಶವಾಗಿದ್ದರೂ ಕೆಲವು ಗ್ರಾಮ ಪಂಚಾಯತಿಗಳಲ್ಲಿ ನಿಯಮಬಾಹಿರವಾಗಿ ಕೋಟ್ಯಾಂತರ ರೂಪಾಯಿ ಬೆಲೆ ಬಾಳುವ ಸಿ.ಎ. ನಿವೇಶನಗಳನ್ನು ವಿವಿಧ ಸಂಘಗಳಿಗೆ ನೀಡಿರುವ ಕುರಿತು ಸಮಗ್ರವಾಗಿ ತನಿಖೆ ಮಾಡಿ ತಪ್ಪಿತಸ್ಥ ಅಧಿಕಾರಿಗಳ ವಿರುದ್ಧ ಕ್ರಮ ಕೈಗೊಳ್ಳುವ ಬಗ್ಗೆ ಮಾನ್ಯ ಮುಖ್ಯಮಂತ್ರಿಯವರ ಗಮನ ಸೆಳೆಯುವುದು.

3) **ಶ್ರೀ ಎಂ. ಕೃಷ್ಣಾರೆಡ್ಡಿ ಅವರು** – ಚಿಂತಾಮಣಿಯಲ್ಲಿರುವ ಸರ್ಕಾರಿ ಬಾಲಕರ ಪ್ರಥಮ ದರ್ಜೆ ಕಾಲೇಜು ಮತ್ತು ಸ್ನಾತಕೋತ್ತರ ಕೇಂದ್ರದಲ್ಲಿ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿ ವೇತನವನ್ನು ನೀಡದಿರುವ ಬಗ್ಗೆ ಮಾನ್ಯ ಉನ್ನತ ಶಿಕ್ಷಣ, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಹಾಗೂ ಕೌಶಲ್ಯಾಭಿವೃದ್ಧಿ ಸಚಿವರ ಗಮನ ಸೆಳೆಯುವುದು.

4) **ಡಾ. ಕೆ. ಅನ್ನದಾನಿ ಅವರು** – ಮಳವಳ್ಳಿ ತಾಲ್ಲೂಕಿನ ಹಲಗೂರು ನೀರಾವರಿ ಯೋಜನೆಯನ್ನು ರೂಪಿಸಲು ಕ್ರಮ ಕೈಗೊಳ್ಳುವ ಬಗ್ಗೆ ಮಾನ್ಯ ಜಲಸಂಪನ್ಮೂಲ ಸಚಿವರ ಗಮನ ಸೆಳೆಯುವುದು.

5) **ಶ್ರೀ ಕೆ. ಮಹದೇವ ಅವರು** – ಪಿರಿಯಾಪಟ್ಟಣ ಮತಕ್ಷೇತ್ರಕ್ಕೆ ತಾಯಿ ಮತ್ತು ಮಕ್ಕಳ ಆಸ್ಪತ್ರೆಯನ್ನು ಮಂಜೂರು ಮಾಡುವ ಬಗ್ಗೆ ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಶಿಕ್ಷಣ ಸಚಿವರ ಗಮನ ಸೆಳೆಯುವುದು.

6) **ಶ್ರೀ ಕೆ.ಎಸ್. ಲಿಂಗೇಶ್ ಅವರು** – ಬೇಲೂರು ವಿಧಾನಸಭಾ ಕ್ಷೇತ್ರದ ಅರಸೀಕೆರೆ ತಾಲ್ಲೂಕಿನ ಜಾವಗಲ್ ಹೋಬಳಿಯಲ್ಲಿ ಕಳೆದ 60 ವರ್ಷಗಳಿಂದ ಉಳುಮೆ ಮಾಡಿ, ತೆಂಗು ಇತ್ಯಾದಿಗಳನ್ನು ಬೆಳೆದುಕೊಂಡು ಮನೆ ಕಟ್ಟಿಕೊಂಡು ವಾಸಿಸುತ್ತಿರುವವರನ್ನು ತೆರವುಗೊಳಿಸಲು ಅರಣ್ಯ ಇಲಾಖೆಯಿಂದ ಉದ್ಘೋಷಣೆ ಹೊರಡಿಸಿರುವ ಬಗ್ಗೆ ಮಾನ್ಯ ಮುಖ್ಯಮಂತ್ರಿಯವರ ಗಮನ ಸೆಳೆಯುವುದು.

7) **ಶ್ರೀ ಎಂ.ವೈ. ಪಾಟೀಲ ಅವರು** – ಅಫಜಲಪೂರ ತಾಲ್ಲೂಕಿನ ಬಂದರವಾಡ ಮತ್ತು ಹೂವಿನಹಳ್ಳಿ ಗ್ರಾಮಗಳಲ್ಲಿ ಎನ್.ಆರ್.ಡಿ.ಡಬ್ಲ್ಯೂ.ಪಿ. ಯೋಜನೆಯಡಿ ಪೂರ್ಣಗೊಳಿಸಿರುವ ಕಾಮಗಾರಿಗಳಿಗೆ ಬಾಕಿ ಇರುವ ಹಣವನ್ನು ಬಿಡುಗಡೆ ಮಾಡುವ ಬಗ್ಗೆ ಮಾನ್ಯ ಮುಖ್ಯಮಂತ್ರಿಯವರ ಗಮನ ಸೆಳೆಯುವುದು.

8) **ಶ್ರೀ ದೊಡ್ಡಗೌಡರ ಮಹಾಂತೇಶ ಬಸವಂತರಾಯ ಅವರು** – ರಾಜ್ಯದಲ್ಲಿ ಪ್ರಾಥಮಿಕ ಶಿಕ್ಷಕರ ಕೊರತೆ ಇರುವುದರಿಂದ ನೇಮಕಾತಿ ಪ್ರಕ್ರಿಯೆಯನ್ನು ಕೂಡಲೇ ಕೈಗೊಳ್ಳುವ ಬಗ್ಗೆ ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರ ಗಮನ ಸೆಳೆಯುವುದು.

9) **ಶ್ರೀ ಎಸ್. ರಾಮಪ್ಪ ಅವರು** – ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆ ಹಾಗೂ ಅದರ ಅಧೀನದ ನಿಗಮಗಳಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಅಧಿಕಾರಿ ಹಾಗೂ ಸಿಬ್ಬಂದಿಗಳಿಗೆ ವೇತನ ಪರಿಷ್ಕರಣೆ ಮಾಡುವ ಬಗ್ಗೆ ಹಾಗೂ ಬಾಕಿ ಮೊತ್ತವನ್ನು ಪಾವತಿಸುವ ಬಗ್ಗೆ ಮಾನ್ಯ ಸಾರಿಗೆ ಹಾಗೂ ಪರಿಶಿಷ್ಟ ಪಂಗಡಗಳ ಕಲ್ಯಾಣ ಸಚಿವರ ಗಮನ ಸೆಳೆಯುವುದು.

10) **ಡಾ. ಹೆಚ್.ಡಿ. ರಂಗನಾಥ್ ಅವರು** – ಕುಣಿಗಲ್ ತಾಲ್ಲೂಕಿನ ಯಡಿಯೂರು ಹೊಸಹಳ್ಳಿಯಿಂದ ಹಂಪಾಪುರ ಸಂಪರ್ಕ ರಸ್ತೆ ನಿರ್ಮಾಣ ಮಾಡುವ ಬಗ್ಗೆ ಮಾನ್ಯ ಲೋಕೋಪಯೋಗಿ ಸಚಿವರ ಗಮನ ಸೆಳೆಯುವುದು.

11) **ಶ್ರೀ ಹೆಚ್. ಹಾಲಪ್ಪ ಹರತಾಳು ಅವರು** – ಸಾಗರ ತಾಲ್ಲೂಕಿನ ವಿವಿಧ ಗ್ರಾಮಗಳ ಕಂದಾಯ ಭೂಮಿಯನ್ನು ಉಳುಮೆ ಮಾಡಿಕೊಂಡಿರುವ ಜಾಗವನ್ನು ಅಂಬಾರಗೋಡು ಜೀವವೈವಿಧ್ಯ ತಾಣವನ್ನಾಗಿ ಘೋಷಿಸಿ ರೈತರನ್ನು ಒಕ್ಕಲೆಬ್ಬಿಸುತ್ತಿರುವ ಬಗ್ಗೆ ಮಾನ್ಯ ಕಂದಾಯ ಸಚಿವರ ಗಮನ ಸೆಳೆಯುವುದು.

12) **ಶ್ರೀ ಬಂಡೆಪ್ಪ ಖಾಶೆಂಪೂರ ಅವರು** – ರಾಜ್ಯದಲ್ಲಿ ರಾಷ್ಟ್ರೀಯ ಆರೋಗ್ಯ ಅಭಿಯಾನ (ಎನ್.ಹೆಚ್.ಎಂ.) ಅಡಿಯಲ್ಲಿ ಅಲ್ಪ ಮೊತ್ತದ ವೇತನದಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಒಳಗುತ್ತಿಗೆ ನೌಕರರನ್ನು ಖಾಯಂಗೊಳಿಸುವ ಬಗ್ಗೆ ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಶಿಕ್ಷಣ ಸಚಿವರ ಗಮನ ಸೆಳೆಯುವುದು.

13) **ಶ್ರೀ ಹೆಚ್.ಡಿ. ರೇವಣ್ಣ ಅವರು** – ಹೊಳೆನರಸೀಪುರ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯ ಶಾಂತಿಗ್ರಾಮದಲ್ಲಿ ಡಾ॥ ಬಿ.ಆರ್. ಅಂಬೇಡ್ಕರ್ ವಸತಿ ಶಾಲೆಯ ಕಟ್ಟಡವನ್ನು ನಿರ್ಮಿಸುವ ಬಗ್ಗೆ ಮಾನ್ಯ ಸಮಾಜ ಕಲ್ಯಾಣ ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರ ಗಮನ ಸೆಳೆಯುವುದು.

14) **ಶ್ರೀ ಲಾಲಾಜಿ ಆರ್. ಮೆಂಡನ್ ಅವರು** – ಉಡುಪಿ ಜಿಲ್ಲೆ ಕಾಪು ತಾಲ್ಲೂಕಿನ ಪಾದೂರು ಗ್ರಾಮದಲ್ಲಿ ಐ.ಎಸ್.ಪಿ.ಆರ್.ಎಲ್. ಕ್ರೂಡ್ ಆಯಿಲ್ ಸ್ಟೋರೇಜ್‌ನ 2ನೇ ಘಟಕದ ವಿಸ್ತರಣಾ ಯೋಜನೆಯನ್ನು ಪ್ರಾರಂಭಿಸುತ್ತಿರುವುದರಿಂದ ನಿರ್ವಸತಿಕರಾಗುತ್ತಿರುವ ಕುಟುಂಬಗಳಿಗೆ ಸೂಕ್ತ ಪುನರ್ವಸತಿ, ಉದ್ಯೋಗ ಮತ್ತು ಪರಿಹಾರ ನೀಡುವ ಬಗ್ಗೆ ಮಾನ್ಯ ಬೃಹತ್ ಮತ್ತು ಮಧ್ಯಮ ಕೈಗಾರಿಕಾ ಸಚಿವರ ಗಮನ ಸೆಳೆಯುವುದು.

**ಎಂ.ಕೆ.ವಿಶಾಲಾಕ್ಷಿ**
**ಕಾರ್ಯದರ್ಶಿ**

---

**ವಿಧಾನಸಭೆಯ ಕಾರ್ಯಕಲಾಪಗಳ ಪಟ್ಟಿಯನ್ನು ಅಂತರ್ಜಾಲದ ಈ ವಿಳಾಸದಲ್ಲಿ ಪಡೆದುಕೊಳ್ಳಬಹುದು**
***http://kla.kar.nic.in/assembly/lob/lob.htm***